ಶ್ರೀ ವಿಜಯದಾಸಾರ್ಯ
ವಿರಚಿತ

# ಶ್ರೀಹರಿನಾಮ ಪ್ರಶಂಸನ ಸ್ತೋತ್ರ ಸುಳಾದಿ



ಸಂಪಾದಕ : ಅರವಿಂದಲೋಚನ

ಶ್ರೀ ವಿಜಯದಾಸಾರ್ಯ

ವಿರಚಿತ

# ಶ್ರೀಹರಿನಾಮ ಪ್ರಶಂಸನ ಸ್ತೋತ್ರ ಸುಳಾದಿ

ಸಂಪಾದಕ : ಅರವಿಂದಲೋಚನ

ಗತಶಾಲಿವಾಹನಶಕ ೧೯೪೨ ಚಾಂದ್ರಮಾನ

ಶಾರ್ವರೀ ನಾಮ ಸಂವತ್ಸರದ

ಹೇಮಂತಋತುವಿನ

ಮಾರ್ಗಶೀರ್ಷ ಮಾಸದ

ಕೃಷ್ಣ ಪಕ್ಷದ ಅಷ್ಟಮೀ ತಿಥಿಯಂದು ಈ ಗ್ರಂಥವು

ಪ್ರಕಟ

# ಶ್ರೀಹರಿನಾಮ ಪ್ರಶಂಸನ ಸ್ತೋತ್ರ ಸುಳಾದಿ

## ರಾಗ ತೋಡಿ

## ಧ್ರುವತಾಳ

ದೊರಕುವದೆ ಹರಿನಾಮ ದೊರಕಿದರೆ ನಿಲುಕದು
ದೊರಕಿದರೆ ಅವ ಬಲು ಧೊರಿಯೇ ಧೊರಿಯೇ
ದೊರಕುವದನಂತ ಧರಣಿಸುರ ಜನ್ಮಗಳು
ದೊರಕದಲ್ಲದೆ ನಾಮ ದೊರಿಯದಯ್ಯಾ
ದೊರೆತವನ ಸುಖಕೆ ವಿಸ್ತರಿಸಲೇನು ಸಪ್ತ -
ಶರಧಿ ದ್ವೀಪಸಹಿತ ಆಳುವಂಥ

ಧೊರಿಯ ಸುಖಕಿಂತ ನೂರ್ಮಡಿ ಮಿಗಿಲು ಅಧಿಕವು
ಮೊರೆಮೊರೆದು ಕೂಗುತಿವೆ ಬಿರಿದು ಘೋಷಾ
ದೊರಿಯದೊ ದೊರಿಯದೊ ಧರಣಿಯೊಳು ಹರಿನಾಮ
ಸ್ಮರಣಿ ಮಾಡಿದವನ ನೋಡಲಾಗಿ
ಧರಾಧರ ಬಲ್ಲ ಧರಾಧರನ ನಾಮ ರುಚಿ -
ಕರವಾಗಿ ಸವಿದು ಸುಂದರವೆಂಬದು
ಅರಿಧರ ಸಂಕ್ಷಿಪ್ತ ವಿಜಯವಿಠ್ಠಲನ
ಸ್ಮರಣಿ ಒಂದಕ್ಕೆ ಎಲ್ಲ ಸರಿ ಎಂದೆನಿಸಾದು ॥ 1 ॥

## ಮಟ್ಟತಾಳ

ಕಾಲಸೂತ್ರವಾದ ಮೇಲಾದ ನರಕದಲಿ
ಗೋಳಿಡುತಲಿ ವಂಶಾವಳಿ ಮಿಡುಕುತಿರೆ
ಭೂಲೋಕದಲಿ ಓರ್ವ ಬಾಲಕನು ಪುಟ್ಟಿ

ಶೀಲಗುಣನಾಗಿ ಕಾಲಕಾಲಕೆ ಹರಿಯಾ
ನಾಲಿಗಿಂದಲಿ ನೆನೆಸಿ ಶ್ರೀಲೋಲಾರ್ಪಿತವ
ವ್ಯಾಳೆ ವ್ಯಾಳೆಗೆ ಯಿಂದ ಘಾಳಿ ಬೀಸಲು ನರಕ
ಶೀಳಿ ಅವನ ಕುಲಕೆ ವಾಲಯವಾಗುವದು
ವಾಲಯದಲ್ಲಿ ವಿಶಾಲ ವೈಕುಂಠದಲಿ
ಶೀಲ ಬ್ರಹ್ಮನ ಪ್ರೀಯಾ ವಿಜಯವಿಠ್ಠಲರೇಯ
ಬೀಳಲೀಸನು ತನ್ನ ಆಳುಗಳಾ ನರಕದಲಿ ॥ 2 ॥

## ತ್ರಿವಿಡತಾಳ

ನಾಮವೆ ಜೀವನ ನಾಮವೆ ಪಾವನ
ನಾಮವೆ ಸಕಲಾಘ ಹೋಮವೆ ವೆಂಬೋದು
ನಾಮವೆನಲು ಸುರಸ್ತೋಮವೆ ಭಜಿಸುವದು
ನೇಮವೆ ತಿಳಿವದು ಪ್ರೇಮವೆ ಎನುತಲಿ

ನಾಮವೆ ಉತ್ತಮ ಹೇಮವೆಂದು ಕಾಯಾ
ಧಾಮವೆ ಮಾಡಿ ಸಕಾಮವೆ ಬಯಸದೆ
ಸಾಮವೇದಲೋಲ ವಿಜಯವಿಠ್ಠಲನ
ನಾಮವೆ ನೆನಿಯೆ ನಿಷ್ಕಾಮವೆ ನುಡಿವುತ್ತಾ ॥ 3 ॥

## ಅಟ್ಟತಾಳ

ಅಪ್ಪ ತಿಮ್ಮಪ್ಪನ ನಾಮವೆ ನೆನಿಸಲು
ತುಪ್ಪ ಸಕ್ಕರೆ ಹಣ್ಣು ಹರಿವಾಣದಲ್ಲಿ
ಒಪ್ಪಾಚಾರದಿಂದ ಸವಿದಂತೆ ಕಾಣಿರೊ
ಅಪ್ರಾಕೃತದ ರಸಕೆ ಪಡಿಯುಂಟೆ
ಸುಪ್ರಸಾದನಾಮ ವಿಜಯವಿಠ್ಠಲನ
ತಪ್ಪದೆ ನಾಮಾ ಗುಪ್ತದಲಿ ನೆನಿಸೊ ॥ 4 ॥

# ಆದಿತಾಳ

ನಾಮ ಒಂದು ಬಲವಾಗಿ ಸೀಮೆಯೊಳಗುಳ್ಳ ಬಲು
ತಾಮಸರು ಬಂದು ಎನ್ನ ರೋಮ ಬಾಗಿಸುವರೆ
ಗೋಮತಿ ಮಿಕ್ಕಾದ ನದಿಯ ಮಿಂದು ಬಂದರೇನು
ನಾಮಕ್ಕನಂತ ಕಡಿಮೆ ಫಲವಧಿಕವಿಲ್ಲ
ಈ ಮಾತು ಮನ್ನಿಸೆ ಸುಕಾಮಿಸಿ ಹರಿಯ ಪಾದ
ನಾಮವೆ ಬಿಡದೆ ನೆನಿಸೆ ರೋಮರೋಮ ದುರಿತನಾಶ
ಕ್ಷೇಮಕೃತೆ ವಿಜಯವಿಠ್ಠಲನ ನಾಮ
ಮುದ್ರಾಂಕಿತದವಗೆ
ಭೂಮಿಯಾಕಾಶಕ್ಕೆ ಒಂದೇ ಸುಮಾರ್ಗವೆಂದು
ಪೇಳೋ ॥ 5 ॥

# ಜತೆ

ಹರಿನಾಮಕೆ ಸರಿಯಾದ ಕುರುಹು ನಾನರಿಯೆನು

ಅರಿದವರಿಗೆ ನಮೋ ಶ್ರೀಶ ವಿಜಯವಿಠ್ಠಲ ॥

## ||ಶ್ರೀ ಕೃಷ್ಣಾರ್ಪಣಮಸ್ತು||

## ||ಶ್ರೀ ಮಧ್ವೇಶಾರ್ಪಣಮಸ್ತು||